# ಕಾನನ

## ನಿಸರ್ಗದೆಡೆಗೆ ಪಯಣ

**JULY 2012**



WILDLIFE CONSERVATION GROUP



# ಕಾನನ

JULY 2012

ನಿಸರ್ಗದೆಡೆಗೆ ಪಯಣ

## ಲೇಖನಗಳು



ಅನಿಸಿಕೆ

E-mail: kaanana.mag@gmail.com

ಮುಖಪುಟ: ಸಸ್ಯದ ಎಲೆ

# ಸಂಪಾದಕೀಯ

1893 ರ ಆಗಸ್ಟ್ 10ರಂದು ಡಾ| ರುಡಾಲ್ಫ್ ಡೀಸೆಲ್ ಎಂಬ ವಿಜ್ಞಾನಿ-ಸಂಶೋಧಕ ಜರ್ಮನಿಯ ಆಗ್ಸ್ ಬರ್ಗ್ ನಲ್ಲಿ ಶೇಂಗಾ ಎಣ್ಣೆಯನ್ನು ಬಳಸುವ ಇಂಜಿನಿಗೆ ಚಾಲನೆ ನೀಡಿದರು. ಆ ದಿನದ ಸ್ಮರಣೆಯನ್ನು ಪ್ರತೀ ಆಗಸ್ಟ್ 10 ರಂದು ಅಂತಾರಾಷ್ಟ್ರೀಯ ಜೈವಿಕ ಇಂಧನ ದಿನವನ್ನು ಆಚರಿಸಲಾಗುತ್ತದೆ. ಜೈವಿಕ ಇಂಧನ ಸಸ್ಯಗಳಾದ ಹೊಂಗೆ, ಬೇವು, ಹಿಪ್ಪೆ, ಸಿಮರೂಬ, ಅಮೂರ, ಜತ್ರೋಪ, ನಾಗಸಂಪಿಗೆ ಮತ್ತು ಬುಗುರಿಕಾಯಿ ಇತರೆ ಸಸ್ಯಗಳನ್ನು ನೆಡುವುದರ ಮೂಲಕ ನೀವು ಆಚರಿಸಿ. . .!

ಜಗತ್ತಿನಲ್ಲಿ ಹೀಗ ಇಂಧನಗಳ ಬಳಕೆ ಹೆಚ್ಚಾಗುತ್ತಲೇ ಇದೆ. ಕಚ್ಚಾ ಇಂಧನ ತೈಲದ ಬೆಲೆಗಳು ಗಗನಕ್ಕೆ ಏರುತ್ತಿದೆ. ಜನಸಾಮಾನ್ಯರಿಗೆ ಪೆಟ್ರೋಲ್, ಡೀಸೆಲ್ ಖರೀದಿಯು ದೊಡ್ಡ ಹೊರೆಯಾಗಿದೆ. ಇಷ್ಟಾಗಿಯೂ ಪಳೆಯುಲಿಕೆ ಇಂಧನ (ಫಾಸಿಲ್ ಫ್ಯುಯೆಲ್) ಎಂದೇ ಕರೆಯಲ್ಪಡುವ ಈ ಪೆಟ್ರೋಲಿಯಂ ಇಂಧನವು ಕೆಲವೇ ದಶಕಗಳಲ್ಲಿ ಖಾಲಿಯಾಗಲಿದೆ. ಈ ಪಳೆಯುಳಿಕೆ ತೈಲಗಳು ಉಂಟುಮಾಡುವ ಪರಿಸರ ಮಾಲಿನ್ಯವೂ ಘೋರ. ಆದ್ದರಿಂದ ಮನುಕುಲಕ್ಕೆ ಪರಿಸರ ಸ್ನೇಹಿಯಾದ ಇಂಧನಗಳ ಸಾಧ್ಯತೆಯನ್ನು ಹುಡುಕುವುದು ಅನಿವಾರ್ಯ. ಅಖಾದ್ಯ ಎಣ್ಣೆ ಬೀಜಗಳಿಂದ ಪಡೆಯುವ ಜೈವಿಕ ಇಂಧನವು ಇಂಥ ಭರವಸೆಯ ಇಂಧನ. ಇದು ಪರಿಸರ ಸ್ನೇಹಿಯಾದ, ಮತ್ತೆ ಮತ್ತೆ ಪಡೆಯಬಹುದಾದ ಶುದ್ಧ ಇಂಧನ. ಬೆಳೆಯಿತ್ತಿರುವ ಇಂಧನ ಬೇಡಿಕೆ ಮತ್ತು ವ್ಯಾಪಕವಾಗುತ್ತಿರುವ ಪರಿಸರ ಮಾಲಿನ್ಯಕ್ಕೆ ಜೈವಿಕ ಇಂಧನವೇ ಸೂಕ್ತವಾದ ಪರಿಹಾರ.

ಕರ್ವಾಲೊ ಪುಸ್ತಕದ ಇನ್ಸ್ಪಿರೇಷನ್ ನಿಂದ ಕಾಡು ಸುತ್ತುವ ನಮ್ಮ ಅಭ್ಯಾಸ ಚಿಟ್ಟು ಮಡಿವಾಳ ಪರಿಚಯವನ್ನು ಮಾಡಿಕೊಟ್ಟಿದ್ದು. ಅಶ್ವಥ.ಕೆ.ಎನ್ ರವರು ಹಕ್ಕಿಲೋಕದಲ್ಲಿ ಬರೆದಿದ್ದರೆ. ಶ್ರೀ ಮುರಳಿ.ಎಸ್ ರವರು ವಿದ್ಯಾರ್ಥಿಗಾಗಿ ವಿಜ್ಞಾನ ಅಂಕಣದಲ್ಲಿ ಸುಮಾರು 300 ಮಿಲಿಯನ್ ವರ್ಷಗಳ ಹಿಂದೆ ಡೈನೊಸಾರ್ ಗಳು ಬರುವ ಮುಂಚೆಯೇ ದೈತ್ಯಕೀಟಗಳ ಜೀವನದ ಬಗ್ಗೆ ಬರೆದಿದ್ದಾರೆ. ಕೆರೆಯ ಕಟ್ಟೆ ಮೇಲೆ ಇರುವ ಒಂದು ಅತ್ತಿಮರ ಎಷ್ಟೆಲ್ಲಾ ಉಪಯೋಗವಿದೆ ಎಂಬುದನ್ನು ಶ್ರೀ ಶಂಕರಪ್ಪ.ಕೆ.ಪಿ ರವರು ವರ್ಣಿಸಿದಾರೆ..

**ಅರಣ್ಯ, ವನ್ಯಜೀವಿ, ಪರಿಸರ ಸಂರಕ್ಷಣೆ, ವಿಜ್ಞಾನ, ವನ್ಯಜೀವಿ ಛಾಯಾಚಿತ್ರ, ಕವನ, ಕಥೆಗಳು ಹಾಗೂ ಲೇಖನಗಳನ್ನು, ತಾವೂ ಕಾನನಕ್ಕೆ ಬರೆಯಬಹುದು.**

ಇ-ಮೇಲ್ ವಿಳಾಸ : **kaanana.mag@gmail.com**

**Wildlife Conservation Group**



# ಹಕ್ಕಿ ಲೋಕ

* ಚಿಟ್ಟು ಮಡಿವಾಳ

**ವೈಜ್ಞಾನಿಕ ಹೆಸರು**: ***Saxicoloides fulicata***

**ಇಂಗ್ಲೀಷ್ ಹೆಸರು**: **Indian Robin**




ಬನ್ನೇರುಘಟ್ಟದ ಹೈಸ್ಕೂಲಿನಲ್ಲಿ ಓದುತ್ತಿದ್ದಾಗಲೇ, ಕಾಡು, ಪ್ರಾಣಿ-ಪಕ್ಷಿಗಳ ಬಗ್ಗೆ ಆಸಕ್ತಿ ಇದ್ದರೂ ಸಹ ಅವುಗಳ ಬಗ್ಗೆ ಆಳವಾದ ಜ್ಞಾನ ಇರಲಿಲ್ಲ. ಆಗಿನ್ನು ಚಿಗುರುತಿತ್ತು, ತೇಜಸ್ವಿಯ ಯಾವುದೇ ಪುಸ್ತಕಗಳನ್ನು ಓದಿರಲಿಲ್ಲ. ನಂತರ ಹತ್ತನೆ ತರಗತಿಯಲ್ಲಿದ್ದಾಗಲೇ "ಕರ್ವಾಲೊ" ಓದಿದ್ದು. ನಮ್ಮ ಹಳ್ಳಿಯ ಜನ "ಹುಡುಗರು ಹಾಳಾದ್ರು" ಎಂಬ ಪಟ್ಟ ಕಟ್ಟಿಸಿ ಕೊಂಡಿದ್ದು, 'ಕರ್ವಾಲೊ' ಕಾದಂಬರಿ ಓದಿದ್ದೆ ತಡ ನಾನು ಶಂಕರ ಕಾಡು-ಮೇಡು, ಉಳ-ಉಪ್ಪಟೆ, ಎಂದು ಸುತ್ತಾಡಲು ಶುರುಮಾಡಿದ್ದು, ಜೇನು ಸಾಕಾಣೆ ಕಲಿತ್ತಿದ್ದು, ಜೇನು ಕಚ್ಚಿ ಮುಖ ಉದಿಸಿಕೊಂಡಿದ್ದು ಎಲ್ಲವೂ ಆಯಿತು! ಹಾಗಿತ್ತು ಆ ಪುಸ್ತಕದ ಇನ್ಸ್ಪರೇಷನ್.!




ಬಿಡುವಿದ್ದಾಗ ಕಾಡು ಸುತ್ತುವುದು, ಹಕ್ಕಿಗಳನ್ನು ಹಿಡಿಯುವುದು, ಸುಬ್ಬನ್ ಸಾಬಿ ಜೊತೆ ಸೇರಿ ಮೀನಿಗೆ ಗಾಳ ಹಾಕೋದು, ಒಟ್ಟಿನಲ್ಲಿ ಇದ್ದಕ್ಕಿದ್ದ ಹಾಗೆ ನಮ್ಮ ಈ ಎಲ್ಲ ಇಲ್ಲಿಗಲ್

ಕೆಲಸಗಳಿಗೆ ಅಪ್ಪ-ಅಮ್ಮ, ಊರಿನ ಜನರ ಆಕ್ಷೇಪಣೆಗಳು ಹೆಚ್ಚುತ್ತಿದ್ದವು. ಹುಡುಗರು ಆಳಾದ್ರು ಎಂಬ ಆರೋಪಗಳು. ಅದೇ ಒಂದು ತರ ಮಜಾ ಬಿಡಿ.

ವಾರದ ರಜೆ ಬಂತೆಂದರೆ ನಮಗೆ ಹಬ್ಬ. ಕೆರೆ, ಕಾಡು, ಗದ್ದೇ ಬೇಲಿ ಬೇಲಿಯನ್ನು ಶೋಧಿಸಿ ತರತರದ ಹಕ್ಕಿ ಗೂಡುಗಳನ್ನು ನೋಡುತ್ತಿದ್ದೆವು.

ಅದೊಂದು ದಿನ ಬೆಳಗ್ಗೆ ಎದ್ದು ಶಂಕರನ ಜೊತೆ ಗೂಡುಗಳನ್ನು ಹುಡುಕುತ್ತಾ ಮಧ್ಯಾಹ್ನದ ವರಿಗೂ. ಅಲೆದಾಡುತ್ತಾ ಸಾಗಿದ್ದು ಗಂಟೆ ಮೂರಾಯಿತು, ಯಾವುದೇ ಹೊಸಗೂಡು ಸಿಕ್ಕಿರಲಿಲ್ಲ. ಕೆರೆ-ಕುಂಟೆ, ಕಾಡು-ಮೇಡು, ಹೊಲ-ಗದ್ದೆಗಳು ಎಲ್ಲಾ ಸುತ್ತಾಡಿ ಸುಸ್ತಾಗಿ ಗದ್ದೆಯ ದಿಬ್ಬದ ಮೇಲೆ ಕುಳಿತು, ಏನು ಯಾವುದು ಹಕ್ಕಿ ಗೂಡು ಸಿಕ್ಕಲ್ಲಿಲ್ಲವಲ್ಲ ಎಂದು ಪೇಚಾಡುತ್ತಾ. ., ಬೇಜಾರಾಗಿ ಕುಳಿತ ಬಳಿ ಇದ್ದ ಸಣ್ಣ ಸಣ್ಣ ಕಲ್ಲುಗಳನ್ನು ಹಾರಿಸುತ್ತಾ ಒಂದೊಂದೇ ಕಲ್ಲುಗಳನ್ನು ಮುಂದೆ ಇದ್ದ ದೊಡ್ಡ ಕಲ್ಲಿಗೆ ಗುರಿಯಿಟ್ಟು ಒಡೆಯುತ್ತಿದ್ದೆವು.

ಕಾಲ ಬಳಿಯೇ ಒಂದು ಗುಬ್ಬಚ್ಚಿ ಗಾತ್ರದ ಕಪ್ಪು ಹಕ್ಕಿ, ರೆಕ್ಕೆಯ ಮೇಲೆ ಚಿಕ್ಕದಾದ ಬಿಳಿಪಟ್ಟಿ, ಬಾಲದ ತಳಭಾಗದಲ್ಲಿ ಕಂದು ಬಣ್ಣ ಕಾಣುತ್ತಿತ್ತು, ಚೇಂವ್. . . ಚೇ. . .ಚೇಂವ್. . . ಚೇ. . .ಎಂದು ಕೂಗುತ್ತಾ. . . ಪುರ್. . . ಎಂದು ಹಾರಿಹೋಗಿ ಗಿಡದ ಮೇಲೆ ಕುಳಿತು ಕೊಳ್ಳುತ್ತಿರುವಾಗ ಅದರ ಬಾಲ ನೈಂಟ್ಟಿ ಡಿಗ್ರಿ ತೋರುತ್ತಿತ್ತು. ನಾವು ಕುಳಿತಿದ್ದ ಪಕ್ಕದಲ್ಲೇ ಎರಡು-ಮೂರು ಕಲ್ಲುಗಳ ಮಧ್ಯದಲ್ಲಿ ಬೇರು, ಹುಲ್ಲು, ಪುಕ್ಕಗಳಿಂದ ಕೂಡಿದ ಗೂಡು!, ಗೂಡಿನಲ್ಲಿ ಕಂದು ಚುಕ್ಕಿಗಳಿರುವ ನಾಲ್ಕು ಕೆನೆ ಬಣ್ಣದ ಮೊಟ್ಟೆಗಳನ್ನು ಇಟ್ಟಿತ್ತು ಚೆಟ್ಟು ಮಡಿವಾಳ.

ಸುತ್ತಾಡಿ ಸುಸ್ತಾಗಿದ ನಮಗೆ ಹೇಳತೀರದ ಸಂತೋಷ. ಮೊಟ್ಟೆಗಳನ್ನು ಕದ್ದು ತಂದು, ತೇಜಸ್ವಿಯ




**ಲಕ್ಷಣಗಳು:** ಗುಬ್ಬಚ್ಚಿ ಗಾತ್ರದ ಚಿಕ್ಕ ಕಪ್ಪು ಹಕ್ಕಿ. ರೆಕ್ಕೆ ಮೇಲೆ ಚಿಕ್ಕಬಿಳಿ ಪಟ್ಟಿ. ಬಾಲದ ತಳಭಾಗದಲ್ಲಿ ಕೆಂಪು ಮಿಶ್ರಿತ ಕಂದಾಗಿರುತ್ತದೆ.

**ಆವಾಸ:** ಕುರುಚಲು ಕಾಡು, ಬಂಡೆ ಪ್ರದೇಶ, ಕೃಷಿ ಭೂಮಿ, ಜನವಸತಿ ಪ್ರದೇಶಗಳು.

**ಸ್ತರ:** ಪೊದೆ, ನೆಲ.

**ಸಂತಾನೋತ್ಪತ್ತಿ:** ಏಪ್ರಿಲ್-ಜೂನ್; ಕಂದು ಚುಕ್ಕೆಗಳಿರುವ 3-4 ಕೆನೆ ಬಣ್ಣದ ಮೊಟ್ಟೆಗಳು.

**ವಿಶೇಷತೆ:** ಸಾಮಾನ್ಯವಾಗಿ ಕುಪ್ಪಳಿಸುತ್ತ ಕೂತಾಗ ಬಾಲವನ್ನು ಆಗಾಗ ಮೀಟುತ್ತಿರುತ್ತದೆ.

“ಅಣ್ಣನ ನೆನಪು” ಪುಸ್ತಕದಲ್ಲಿನ ತೇಟ್  “ಸುಶ್ಮಿತ ಮತ್ತು ಹಕ್ಕಿಮರಿ” ಯ ತರ, ಮನೆಯಲ್ಲಿ ಕರೆಂಟ್ ಬಲ್ಬ್ ಬಳಿ ಗೂಡನ್ನು ನೇತು ಹಾಕಿ ಮೊಟ್ಟೆಗಳಿಗೆ ಶಾಖಕೊಟ್ಟೆ ದಿನಾಲು ಮರಿಹೊರ ಬಂದಿದೆಯಾ. . .? ಎಂದು ನೋಡುವುದು ಪರಿ ಪಾತವಾಗಿತ್ತು. ಹದಿನೈದು ದಿನವಾದರೂ ಮೊಟ್ಟೆಗಳಿಂದ ಮರಿಗಳು ಹೊರಬರಲ್ಲಿಲ್ಲ, ಮೊಟ್ಟೆಗಳನ್ನು ಕಳೆದುಕೊಂಡ ತಾಯಿಹಕ್ಕಿಯ ದುಃಖಕ್ಕಿಂತ ನಮ್ಮ ಕೈಯಲ್ಲಿ ಮರಿ ಮಾಡಿಸಲಾಗಲ್ಲಿಲ್ಲವಲ್ಲ ಎಂಬ ಬೇಸರ ನಮಗೇ ಹೆಚ್ಚಾಗಿತ್ತು.

ಮನೆಯಲ್ಲಿ ಅಮ್ಮನ ಕೈಯಲ್ಲೂ ಬೈಯಿಸಿಕೊಳ್ಳಬೇಕಾಯಿತು. “ನಿಮಗೆ ಮಾಡಲು ಕೆಲಸವಿಲ್ಲ, ಪಾಪ ಆ ಹಕ್ಕಿಯ ಮೊಟ್ಟೆಗಳನ್ನು ತಂದು ಹಾಳುಮಾಡುತ್ತಿದ್ದೀರಿ..! ಅದರ ಕರ್ಮ ನಿಮಗೆ” ಎಂದು ಬೈಯುತ್ತಿದ್ದಳು. ಅಮ್ಮನ ಭಾಷಣವನ್ನು ಕೇಳಿ ಸಾಕಾಗಿದ್ದ ನಮಗೆ ಮೊಟ್ಟೆಗಳನ್ನು ತೆಗೆದು ಮತ್ತೆ ಅದೇ ಗೂಡಿನಲ್ಲಿ ಇಟ್ಟುಬಂದೆವು.

ಅಂದಿಗೆ ಹಕ್ಕಿ ಮೊಟ್ಟೆ ತೆಗೆಯುವುದನ್ನು ನಿಲ್ಲಿಸಿದೆವು. ಗೂಡು ಸಿಗಲಿಲ್ಲವೆಂದು ವಿಶ್ರಾತರಾಗಿ ಕುಳಿತ್ತಿದ್ದಾಗ ಕಾಲ ಬಳಿಯಲ್ಲೇ ಹಾರಿ ನಮಗೆ ಅಚ್ಚರಿಯನ್ನು ಉಂಟುಮಾಡಿ ಮೊಟ್ಟೆ ಕಳೆದುಕೊಂಡ ಆ ಹಕ್ಕಿಯೇ ನಮಗೆ  ಪರಿಸರ, ಕಾಡು, ಹಕ್ಕಿ, ಪ್ರಾಣಿ, ಕೀಟಗಳ ಬಗ್ಗೆ ಅಪಾರ  ಕಾಳಜಿ ಮೂಡುವಂತೆ ಮಾಡಿತು ಎಂದು ನಂಬಿದ್ದೇವೆ. .!






# ವಿದ್ಯಾರ್ಥಿಗಾಗಿ ವಿಜ್ಞಾನ

## * ದೈತ್ಯ ಕೀಟಲೋಕ



ಇಂದಿಗೆ ಸುಮಾರು 300 ಮಿಲಿಯನ್ ವರ್ಷಗಳ ಹಿಂದೆ ಡೈನೊಸಾರ್ ಗಳು ಬರುವ ಮುಂಚೆಯೇ ದೈತ್ಯಕೀಟಗಳ ಲೋಕ ಇದ್ದು ನಶಿಸಿ ಹೋಗಿವೆ. ಉದಾಹರಣೆಗೆ ಪಳೆಯುಳಿಕೆಗಳಲ್ಲಿ ಸಿಕ್ಕಿರುವ ಏರೋಪ್ಲೇನ್ ಚಿಟ್ಟೆಯ ಗಾತ್ರ ಕ್ರಿಕೆಟ್ ಬ್ಯಾಟಿನಷ್ಟು ಉದ್ದವಿದೆ. ಆದರೆ ಇವು ಇನ್ನೂ ದೊಡ್ಡ ಜೀವಿಗಳಿಗೆ ಬೇಟೆಯಾಗಿ ಪರಿಣಮಿಸಿ ಸಂತತಿಯೇ ಇಲ್ಲವಾಗಿದೆ.

ಈ ದೈತ್ಯಾಕಾರಕ್ಕೆ ಕಾರಣ ವಾತಾವರಣದಲ್ಲಿನ ಹೆಚ್ಚಿನ ಆಮ್ಲಜನಕ.ಆದರೆ ವಿಜ್ಞಾನಿಗಳ ಇನ್ನೊಂದು ಗುಂಪು 150 ಮಿಲಿಯನ್ ವರ್ಷಗಳ ಹಿಂದೆ ಅಂದರೆ ಇವು ನಶಿಸಿ ಹೋಗುವ ಸಮಯದಲ್ಲಿ, ವಾತವರಣದಲ್ಲಿ ಇನ್ನೂ ಹೆಚ್ಚಿನ ಆಮ್ಲಜನಕ ಇತ್ತಂತೆ. ಆದರೂ ಕೂಡ ಕೀಟಗಳ ಗಾತ್ರ ಹೆಚ್ಚಲಿಲ್ಲ ಎನ್ನುತ್ತಾರೆ.

ಇದರ ಕಾರಣ ತಿಳಿಯಲು ವಿಜ್ಞಾನಿಗಳು ಸುಮಾರು 10500 ಫಾಸಿಲ್ ಗಳಲ್ಲಿ ಕೀಟ ಗಾತ್ರ ಮತ್ತು ಆಮ್ಲಜನಕದ ಪ್ರಮಾಣ ಎಷ್ಟಿತ್ತೆಂದು ಅಧ್ಯಯನ ನಡೆಸಿದ್ದಾರೆ. ಅಧ್ಯಯನದ ಪ್ರಕಾರ ಅಮ್ಲಜನಕ ಹೆಚ್ಚಿದಂತೆ ಕೀಟಗಳ ಗಾತ್ರ ಹೆಚ್ಚಿದ್ದು ಸತ್ಯ ಆದರೆ 150 ಮಿಲಿಯನ್ ವರ್ಷಗಳ ಹಿಂದಿನ ಕಾಲದಲ್ಲಿ ಪಕ್ಷಿಗಳ ಉಗಮವಾಗಿ ಅವುಗಳು ಬೇಟೆಯ ಕಲೆಯನ್ನು ಕರಗತ ಮಾಡಿಕೊಂಡಿದ್ದವು. ಆದ್ದರಿಂದ ದೈತ್ಯ ಕೀಟಗಳ ಸಂಖ್ಯೆ ಕಡಿಮೆಯಾಗಿ ಕ್ರಮೇಣ ನಶಿಸಿ ಹೋದವಂತೆ.







# ಅತ್ತಿ ಮರ

ಅತ್ತಿಮರ ಅತ್ತಿಮರ
ಕೆರೆಯ ಕಟ್ಟೆ ಮ್ಯಾಲಿರೋ ಅತ್ತಿಮರ
ಇರುವ ಇಪ್ಪತ್ನಾಲ್ಕು ಕೋಟಿ ಜೀವ ರಾಶಿಗೂ
ಹಣ್ಣು ನೀರು ನೆರಳು ಕೊಡೋ ಅತ್ತಿ ಮರ

ಮೂಡಣದ ಸೂರ್ಯನ ಬಣ್ಣಕ್ಕೆ ಸರಿಯಾಗಿ
ಎರಡೆರಡು ತಿಂಗಳಿಗೂ ಬಸಿರಾಗಿ
ಮೈತುಂಬ ಹಣ್ಣು ಬಿಡೋ ಅತ್ತಿ ಮರ

ಜೇನಿಗೆ ಗೂಂದು, ಕೊನೆ ಮನೆ ಶಾರದಿಯ
ಪಾಳಬಿಟ್ಟ ಕಾಲಿಗೆ ಔಷಧಿ
ಚೂಡನ ಆಡುಮರಿಗೆ ಮೇವು.......
ಬಟ್ಟೆಒಗೆಯುವ ಹೆಣ್ಣೈಕಳಿಗೆ ನೆರಳೀಯುವ ಅತ್ತಿಮರ

ಚೇಳು ಇರುವೆ ಎಮಿರ್ಕ
ಹಾಲಕ್ಕಿ ಬೆಳ್ಳಕ್ಕಿ ತರತರದ ಹಕ್ಕಿಗಳೂ
ಬಂದು ಕೂತು ತುಸುಹೊತ್ತು ನೆರಳಲ್ಲಿ
ರಾತ್ರಿಕಳಿಯುವ ಜಾಗ ಅತ್ತಿಮರ

ಪಾಕಾಳಿಯ ಮಗನ ಚಟರಬಿಲ್ಲಿಗೆ ಬಿಲ್ಲಾದ!
ಆಚಾರಿಯ ಆಚಾರಕ್ಕೆ ದೇವರಾದ ಅತ್ತಿಮರ

ಸುಡುಗಾಡನ್ನು ತಂಪಾಗಿಸಿದ ಅ ನಿನ್ನ
ನೆರಳಲ್ಲೇ ಕುಳಿತು
ನಿನ್ನ ಕಡಿಯಲು ಯತ್ನಿಸುವವರನ್ನ
ಅಪಾರ ಪ್ರೇಮದಿಂದ ನೆರಳಿಟ್ಟು
ಸಲಹುತಿಹೇ?!

ಹಣ್ಣಲ್ಲೇ ಕಿರಿದೊಂದು ಬಾಗಿಲಿಟ್ಟು
ಸುಗಂದ ಸೂಸಿ
ಕೀಟವನ್ನು ಸ್ವಾಗತಿಸದಂತೆ
ಎಂದಾದರೊಂದು ದಿನ ತೋರು ನಿನ್ನ
ಅಂಗೈಯಗಲದ  ಬಿಳಿ ಹೂವ!

- ಶಂಕರಪ್ಪ .ಕೆ.ಪಿ

# ಜೈವಿಕ ಇಂಧನ ಮೇಳ

ಜಗತ್ತಿನಲ್ಲಿ ಇಂಧನಗಳ ಬಳಕೆ ಹೆಚ್ಚಾಗುತ್ತಲೇ ಇದೆ. ಕಚ್ಚಾ ಇಂಧನ ತೈಲದ ಬೆಲೆಗಳು ಏರುತ್ತಿದೆ. ಜನಸಾಮಾನ್ಯರಿಗೆ ಪೆಟ್ರೋಲ್, ಡೀಸೆಲ್ ಖರೀದಿಯು ದೊಡ್ಡ ಹೊರೆಯಾಗಿದೆ. ಇಷ್ಟಾಗಿಯೂ ಪಳೆಯುಳಿಕೆ ಇಂಧನ (ಫಾಸಿಲ್ ಫ್ಯುಯೆಲ್) ಎಂದೇ ಕರೆಯಲ್ಪಡುವ ಈ ಪೆಟ್ರೋಲಿಯಂ ಇಂಧನವು ಕೆಲವೇ ದಶಕಗಳಲ್ಲಿ ಖಾಲಿಯಾಗಲಿದೆ. ಈ ಪಳೆಯುಳಿಕೆ ತೈಲಗಳು ಉಂಟುಮಾಡುವ ಪರಿಸರ ಮಾಲಿನ್ಯವೂ ಘೋರ. ಆದ್ದರಿಂದ ಮನುಕುಲಕ್ಕೆ ಪರಿಸರ ಸ್ನೇಹಿಯಾದ ಇಂಧನಗಳ ಸಾಧ್ಯತೆಯನ್ನು ಹುಡುಕುವುದು ಅನಿವಾರ್ಯ. ಅಖಾದ್ಯ ಎಣ್ಣೆ ಬೀಜಗಳಿಂದ ಪಡೆಯುವ ಜೈವಿಕ ಇಂಧನವು ಇಂಥ ಭರವಸೆಯ ಇಂಧನ. ಇದು ಪರಿಸರ ಸ್ನೇಹಿಯಾದ, ಮತ್ತೆ ಮತ್ತೆ ಪಡೆಯಬಹುದಾದ ಶುದ್ಧ ಇಂಧನ. ಬೆಳೆಯಿತ್ತಿರುವ ಇಂಧನ ಬೇಡಿಕೆ ಮತ್ತು ವ್ಯಾಪಕವಾಗುತ್ತಿರುವ ಪರಿಸರ ಮಾಲಿನ್ಯಕ್ಕೆ ಜೈವಿಕ ಇಂಧನವೇ ಸೂಕ್ತವಾದ ಪರಿಹಾರ.

1893 ರ ಆಗಸ್ಟ್ 10ರಂದು ಡಾ। ರುಡಾಲ್ಫ್ ಡೀಸೆಲ್ ಎಂಬ ವಿಜ್ಞಾನಿ-ಸಂಶೋಧಕ ಜರ್ಮನಿಯ ಆಗ್ಸ್ ಬರ್ಗ್ ನಲ್ಲಿ ಶೇಂಗಾ ಎಣ್ಣೆಯನ್ನು ಬಳಸುವ ಇಂಜಿನಿಗೆ ಚಾಲನೆ ನೀಡಿದರು. ಆ ದಿನದ ಸ್ಮರಣೆಯನ್ನು ಪ್ರತೀ ಆಗಸ್ಟ್ 10 ರಂದು ಅಂತಾರಾಷ್ಟ್ರೀಯ ಜೈವಿಕ ಇಂಧನ ದಿನವನ್ನು ಆಚರಿಸಲಾಗುತ್ತದೆ. ನೀವು ಈ ರೀತಿಯಾಗಿ ಅಂತಾರಾಷ್ಟ್ರೀಯ ಜೈವಿಕ ಇಂಧನ ದಿನವನ್ನು ಆಚರಿಸಿ. . .!.

ಕರ್ನಾಟಕದಲ್ಲಿ ಜೈವಿಕ ಇಂಧನ ಅಭಿಯಾನವನ್ನು ಆರಂಭಿಸಲು ಈ ಹಿಂದೆ ಸ್ಥಾಪಿಸಿದ ಜೈವಿಕ ಇಂಧನ ಕಾರ್ಯಪಡೆಯು ರಾಜ್ಯ ಜೈವಿಕ ಇಂಧನ ನೀತಿಯನ್ನು ರೂಪಿಸಿತು. ಈ ನೀತಿಯಲ್ಲಿ ನೀಡಿದ ಪ್ರಮುಖ ಶಿಫಾರಸುಗಳನ್ನು ಕಾರ್ಯರೂಪಕ್ಕೆ ತರಲು 2010ರ ಡಿಸೆಂಬರ್ 6ರಂದು ಕರ್ನಾಟಕ ರಾಜ್ಯ ಜೈವಿಕ ಇಂಧನ ಅಭಿವೃದ್ಧಿ ಮಂಡಳಿಯನ್ನು ಸ್ಥಾಪಿಸಲಾಗಿದೆ.

ಮಂಡಳಿಯ ಹತ್ತು ಹಲವು ಕಾರ್ಯಕ್ರಮಗಳು ಮತ್ತು ಯೋಜನೆಗಳ ಮೂಲಕ ರಾಜ್ಯದಾದ್ಯಂತ ಜೈವಿಕ ಇಂಧನವನ್ನು ಪರ್ಯಾಯ ಇಂಧನವಾಗಿ ಬಳಸಲು ಪ್ರೋತ್ಸಾಹಿಸುತ್ತ ಬಂದಿದೆ. ಅಲ್ಲದೆ ರಾಜ್ಯ ಜೈವಿಕ ಇಂಧನ ನೀತಿಯನ್ನು ಮಂಡಳಿಯು ಅಧಿಕೃತವಾಗಿ ಪ್ರಕಟಿಸಿದೆ. ರಾಜ್ಯದ ಎಲ್ಲ ಜಿಲ್ಲಾ ಕೇಂದ್ರಗಳಲ್ಲಿ ಜೈವಿಕ ಇಂಧನ ಕುರಿತು ಮಾಹಿತಿ ಮತ್ತು ಪ್ರಾತ್ಯಕ್ಷಿಕೆ ಕೇಂದ್ರಗಳನ್ನು ಆರಂಭಿಸಿದೆ. ಆಹಾರ ಬೆಳೆಗಳ ಪ್ರದೇಶವನ್ನು ಮುಟ್ಟದೆಯೇ ಬದು, ಬೀದಿ, ಬೀಳುಭೂಮಿ, ಹಿನ್ನೀರು, ನದೀತಟ, ಶಾಲಾಬಯಲು, ಬೇಲಿ, ರಸ್ತೆಬದಿ, ನಾಲೆ- ಇಂಥ ಪ್ರದೇಶಗಳಲ್ಲಿ ಜೈವಿಕ ಇಂಧನ ಸಸ್ಯಗಳನ್ನು ಬೆಳೆಸಲು ಮಂಡಳಿಯು ಹಲವು ಜನಪರ ಯೋಜನೆಗಳನ್ನು ಪ್ರಕಟಿಸಿ ಜಾರಿಗೆ ತಂದಿದೆ. ಮಂಡಳಿಯು ಹಸಿರು ಹೊನ್ನು, ಬರಡು ಬಂಗಾರ, ಸುವರ್ಣ ಭೂಮಿ ಯೋಜನೆಗಳ ಮೂಲಕ ಜೈವಿಕ ಇಂಧನ ಉಸ್ತುವಾರಿ ಸ್ಮಿತಿ ರಚಿಸಿ ವಾರ್ಷಿಕ ಕ್ರಿಯಾ ಯೋಜನೆಯ ಮೂಲಕ ಅಭಿಯಾನವನ್ನು ಮುನ್ನಡೆಸಿಕೊಂಡು ಬರಲಾಗಿದೆ. ಇಂಥ ನಿರಂತರ ಪ್ರಯತ್ನದಿಂದ ಕರ್ನಾಟಕವು ಭಾರತದಲ್ಲೇ ಜೈವಿಕ ಇಂಧನ ಅಭಿಯಾನದಲ್ಲಿ ತನ್ನದೇ ವಿಶಿಷ್ಟ ಸ್ಥಾನವನ್ನು ಹೊಂದಿದೆ.

## ಜೈವಿಕ ಇಂಧನ ಮೇಳದ ಕಾರ್ಯಕ್ರಮಗಳು

### ಪೂರ್ವಭಾವಿ ಕಾರ್ಯಕ್ರಮಗಳು

ಈ ಮೇಳದ ಸಂದರ್ಭದಲ್ಲಿ ಮಾಧ್ಯಮಿಕ ಮತ್ತು ಪ್ರೌಢಶಾಲೆಗಳ ವಿದ್ಯಾರ್ಥಿಗಳಿಗೆ ಜೈವಿಕ ಇಂಧನ ಚಿತ್ರಕಲೆ, ಪ್ರಬಂಧ ಮತ್ತು ಚರ್ಚಾ ಸ್ಪರ್ಧೆಗಳನ್ನು ನಡೆಸಲಾಗುವುದು. ಮೇಳದಲ್ಲಿ ಬಹುಮಾನಿತ ಚಿತ್ರಗಳ ಪ್ರದರ್ಶನ ಇರುತ್ತದೆ.

ಆಗಸ್ಟ್ 10 ರಂದು ಗಣ್ಯರಿಂದ ಮೇಳ ಮತ್ತು ಪ್ರದರ್ಶನ ಮಳಿಗೆಗಳ ಉದ್ಘಾಟನೆಯಾಗಲಿದೆ. ಅಂದಿನಿಂದ ಮೂರೂ ದಿನಗಳ ಕಾಲ ತಂತ್ರಜ್ಞಾನ ಪ್ರಾತ್ಯಕ್ಷಿಕೆಗಳು; ಭಿತ್ತಿಪತ್ರಗಳ ಪ್ರದರ್ಶನ. ಪ್ರದರ್ಶನ. ಸಾಂಸ್ಕೃತಿಕ ಕಾರ್ಯಕ್ರಮಗಳು ನಿರಂತರವಾಗಿ ನಡೆಯಲಿವೆ. ಅಲ್ಲದೆ ಮೂರೂ ದಿನಗಳ ಕಾಲ ಸಭಾ ಕಾರ್ಯಕ್ರಮಗಳು ನಡೆಯಲಿವೆ. ಆಗಸ್ಟ್ 12 ರಂದು ಸಮಾರೋಪ ಸಮಾರಂಭ ನಡೆಯಲಿದೆ.

### ವಿಶೇಷ ಕಾರ್ಯಕ್ರಮಗಳು

ರಾಜ್ಯದಲ್ಲಿ ಜೈವಿಕ ಇಂಧನ ಕುರಿತು ನಡೆಯುತ್ತಿರುವ ವಿವಿಧ ಪ್ರಯೋಗಗಳ ಕುರಿತು ಭಿತ್ತಿ ಪ್ರದರ್ಶನ, ನಮ್ಮ ರಾಜ್ಯದಲ್ಲಿ ಬೆಳೆಯುವ ಹಲವು ಬಗೆಯ ಜೈವಿಕ ಇಂಧನ ಸಸ್ಯಗಳ, ಅವುಗಳ ಎಣ್ಣೆ, ಇಂಧನ ಮಾದರಿಗಳ ಪ್ರದರ್ಶನ, ಜೈವಿಕ ಇಂಧನ ಉತ್ಪಾದನಾ ಘಟಕದ ಮತ್ತು ವಿವಿಧ ಯಂತ್ರಗಳ ಪರಿಚಯ ಮತ್ತು ಪ್ರಾತ್ಯಕ್ಷಿಕೆ, ಮಂಡಳಿಯು ಕೈಗೊಂಡ ಉಪಕ್ರಮಗಳ ಪರಿಚಯ, ಜೈವಿಕ ಇಂಧನ ಸಾಕ್ಷ್ಯಚಿತ್ರದ ಪ್ರದರ್ಶನ, ಜೈವಿಕ ಇಂಧನ ರಂಗದ ವಿವಿಧ ಆಯಾಮಗಳ ಕುರಿತು ಸಭಾಚರ್ಚೆ, ಸಮಾಲೋಚನೆಗಳು, ಜೈವಿಕ ಇಂಧನ ಸಂಶೋಧನೆ ಮತ್ತು ಅಭಿವೃದ್ಧಿ ಕುರಿತು ಮಾಹಿತಿಗಳು.

### ಆಕರ್ಷಣೆಯ ಕಾರ್ಯಕ್ರಮಗಳು

ಮೂರು ದಿನಗಳ ಈ ಜೈವಿಕ ಇಂಧನ ಮೇಳದಲ್ಲಿ ಜೈವಿಕ ಇಂಧನ ಪ್ರಚಾರಕ್ಕಾಗಿ ಹಲವು ಆಕರ್ಷಕ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗಿದೆ. ಜೈವಿಕ ಇಂಧನ ಅಭಿಯಾನದ ವಿಷಯಗಳನ್ನು ಒಳಗೊಂಡ ಜಾನಪದ ಸಂಗೀತ, ರಾಕ್, ಯಕ್ಷಗಾನ, ನಾಟಕ ಮತ್ತು ನೃತ್ಯ ಕಾರ್ಯಕ್ರಮಗಳು ಪ್ರತಿದಿನ ಸಂಜೆಯ ಹೊತ್ತು ನಡೆಯಲಿವೆ.

### ಬಿಡುಗಡೆ ಕಾರ್ಯಕ್ರಮಗಳು

- ✓ ಕರಾಜೈಅಮದ ಜೈವಿಕ ಇಂಧನ ಚಟುವಟಿಕೆಯ ಕುರಿತು ಪುಸ್ತಕ.
- ✓ ಸರ್ಕಾರದ ಜೈವಿಕ ಇಂಧನ ಕಾರ್ಯಕ್ರಮಗಳ ಪುಸ್ತಕ.
- ✓ ಜೈವಿಕ ಶಕ್ತಿಯ ಸಂಶೋಧನಾ ಪ್ರಕಲ್ಪಗಳ ಸಂಕಲನ
- ✓ ಜೈವಿಕ ಇಂಧನ ಮೇಳದ ಸ್ಮರಣ ಸಂಚಿಕೆ.
- ✓ ಮಕ್ಕಳ ಬಹುಮಾನಿತ ಕಲಾಕೃತಿ, ಪ್ರಬಂಧಗಳ ಸಂಕಲನ.

**ನೀವು ಹೇಗೆ ಭಾಗವಹಿಸಬಹುದು?**

- ಶಾಲಾ-ಕಾಲೇಜಿನ ಪ್ರಾಂಶುಪಾಲರು ನಿಮ್ಮ ವಿದ್ಯಾರ್ಥಿಗಳ ಜೊತೆ ಬಂದು ಭಾಗವಹಿಸಬಹುದು.
- ಪಾಲಕರು ತಮ್ಮ ಮಕ್ಕಳನ್ನು ಚಿತ್ರಕಲಾ ಸ್ಪರ್ಧೆಗೆ ಕಳಿಸಬಹುದು.
- ಶಾಲಾ-ಕಾಲೇಜಿನ ವಿದ್ಯಾರ್ಥಿಗಳು ಮೇಳದಲ್ಲಿ ಸಕ್ರಿಯವಾಗಿ ಭಾಗವಹಿಸಬಹುದು; ವಿವಿಧ ಸಾಂಸ್ಕೃತಿ ಕಾರ್ಯಕ್ರಮಗಳಲ್ಲಿ, ಸ್ಪರ್ಧೆಗಳಲ್ಲಿ ಪಾಲ್ಗೊಳ್ಳಬಹುದು.
- ಡೀಸೆಲ್ ವಾಹನ ಹೊಂದಿದವರು ಅದನ್ನು ಮೇಳಕ್ಕೆ ತಂದು ಬಯೋಡೀಸೆಲ್ ಖರೀದಿಸಬಹುದು; ಜೈವಿಕ ಇಂಧನ ಬಗ್ಗೆ ಆತ್ಮವಿಶ್ವಾಸ ಹೆಚ್ಚಿಸಿಕೊಳ್ಳಬಹುದು.
- ಸಾರ್ವಜನಿಕರು ಮೇಳದಲ್ಲಿ ಔಪಚಾರಿಕ ಬೆಲೆಗೆ ಜೈವಿಕ ಇಂಧನ ಸಸ್ಯ, ಬೀಜ, ಎಣ್ಣೆ, ಬಯೋಡೀಸೆಲ್, ಹಿಂಡಿ ಹಾಗೂ ಇತರೆ ಉತ್ಪನ್ನಗಳನ್ನು ಖರೀದಿಸಬಹುದು.
- ಜನಪ್ರತಿನಿಧಿಗಳು, ಇಲಾಖೆಗಳ ಅಧಿಕಾರಿಗಳು ತಮ್ಮ ಕ್ಷೇತ್ರದ, ಕಛೇರಿಯ ಸಿಬ್ಬಂದಿಗಳನ್ನು ತಂಡಗಳಲ್ಲಿ ಕರೆದುಕೊಂಡು ಬಂದು ಜೈವಿಕ ಇಂಧನದ ಬಗ್ಗೆ ತಿಳಿಯಬಹುದು.
- ಈ ಮೇಳದ ಬಗ್ಗೆ ಬ್ಲಾಗ್, ಫೇಸ್ ಬುಕ್, ಟ್ವಿಟರ್ ಗಳಲ್ಲಿ ಪ್ರಚಾರ ಮಾಡಿ, ನಿಮ್ಮ ಸ್ನೇಹಿತರನ್ನು, ಸಹೋದ್ಯೋಗಿಗಳನ್ನು ಮೇಳಕ್ಕೆ ಆಹ್ವಾನಿಸಬಹುದು.
- ಮೇಳದ ಪ್ರಚಾರಪತ್ರಗಳನ್ನು ನೀವು www.biofuelkarnataka.com ಈ ಲಿಂಕ್ ನಿಂದ ಪಡೆಯಬಹುದು.
- ನೀವು ಲೇಖಕ-ಪತ್ರಕರ್ತರಾಗಿದ್ದರೆ ಜೈವಿಕ ಇಂಧನ ಅಭಿಯಾನದ ಬಗ್ಗೆ ಲೇಖನಗಳನ್ನು ಬರೆಯಬಹುದು. ಗೋಷ್ಠಿಗಳಲ್ಲಿ ಭಾಗವಹಿಸಬಹುದು.
- ನೀವು ಜೈವಿಕ ಇಂಧನ ತಜ್ಞರಾಗಿದ್ದರೆ ನಮಗೆ ಮಾಹಿತಿಪೂರ್ಣ ಲೇಖನಗಳನ್ನು ಕಳಿಸಿಕೊಡಿ.

**ಪ್ರದರ್ಶನ ಮತ್ತು ಪ್ರಚಾರ ಮಳಿಗೆಗಳು**

ಜೈವಿಕ ಇಂಧನ ಅಭಿಯಾನದಲ್ಲಿ ಭಾಗಿಯಾದ ವಿವಿಧ ಸಂಘ, ಸಂಸ್ಥೆ, ಕಾರ್ಪೋರೇಟ್ ಗಳು ತಮ್ಮ ಮಳಿಗೆಗಳನ್ನು ಮೇಳದ ಆವರಣದಲ್ಲಿ ಸ್ಥಾಪಿಸಬಹುದು. ವಿವಿಧ ಅಳತೆಯ ಮಳಿಗೆಗಳು ಅತ್ಯಂತ ಲಾಭರಹಿತ ದರದಲ್ಲಿ ಸಿಗುತ್ತವೆ. ಈ ಮಳಿಗೆಗಳಲ್ಲಿ ಮುಖ್ಯವಾಗಿ ಜೈವಿಕ ಇಂಧನದ ಪ್ರಯೋಗಗಳ ಬಗ್ಗೆ ಪ್ರದರ್ಶನ, ಪ್ರಚಾರ ಮಾಡಬಹುದು. ಜೊತೆಗೇ ಸಂಸ್ಥೆಯ ಸಾಮಾನ್ಯ ಮಾಹಿತಿಯನ್ನೂ ನೀಡಬಹುದು.

ಹೆಚ್ಚಿನ ವಿವರಗಳಿಗೆ ಸಂಪರ್ಕಿಸಿ

**ಕರ್ನಾಟಕ ರಾಜ್ಯ ಜೈವಿಕ ಇಂಧನ ಅಭಿವೃದ್ಧಿ ಮಂಡಳಿ**

ನಂ.116, 8ನೇ ಅಡ್ಡರಸ್ತೆ, ರೈಲ್ವೇ ಸಮಾನಾಂತರ ರಸ್ತೆ,
ಕುಮಾರ ಪಾರ್ಕ್ ಪಶ್ಚಿಮ, ಬೆಂಗಳೂರು–560 020
ದೂರವಾಣಿ : 080–23568199 ಫ್ಯಾಕ್ಸ್ : 080–23568200

www.biofuelkarnataka.com

BIO FUEL MELA 2012
BIOFUEL FUTURE FUEL
BANGALORE
AUGUST 10,11,12
KARNATAKA CHITRAKALA PARISHAT

ಬನ್ನಿ, ಭಾಗವಹಿಸಿ

ಕರ್ನಾಟಕ ಸರ್ಕಾರ

**ಕರ್ನಾಟಕ ರಾಜ್ಯ ಜೈವಿಕ ಇಂಧನ ಅಭಿವೃದ್ಧಿ ಮಂಡಳಿ**

# ಜೈವಿಕ ಇಂಧನ ಮೇಳ

2012

## ಬೆಂಗಳೂರು

## ಆಗಸ್ಟ್ 10,11,12

## ಚಿತ್ರಕಲಾ ಪರಿಷತ್

ಜೈವಿಕ ಇಂಧನ.
ಭವಿಷ್ಯದ ಇಂಧನ

